# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 748

ಸದಸ್ಯರ ಹೆಸರು : ಡಾ॥ ವೈ.ಎ.ನಾರಾಯಣಸ್ವಾಮಿ

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 05.03.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಾರಿಗೆ ಇಲಾಖೆಯ ಅಡಿಯಲ್ಲಿ ನಡೆಸುತ್ತಿರುವ ವಿವಿಧ ನಿಗಮ/ ಮಂಡಳಿಗಳು ಯಾವುವು; (ವಿವರ ನೀಡುವುದು) | ಸಾರಿಗೆ ಇಲಾಖೆಯ ವ್ಯಾಪ್ತಿಯಲ್ಲಿ ಈ ಕೆಳಕಂಡ ನಿಗಮ/ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ:<br>1. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂಗಳೂರು.<br>2. ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಬೆಂಗಳೂರು.<br>3. ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿ.<br>4. ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕಲಬುರಗಿ |
| ಆ) | ಈ ನಿಗಮ ಮತ್ತು ಮಂಡಳಿಗಳಲ್ಲಿ ಕಳೆದ 3 ವರ್ಷಗಳಲ್ಲಿ ಆರ್ಥಿಕ ನಷ್ಟ ಅನುಭವಿಸಿರುವ ನಿಗಮ/ ಮಂಡಳಿಗಳು ಯಾವುವು; | ಈ ನಾಲ್ಕೂ ನಿಗಮ/ ಸಂಸ್ಥೆಗಳು ಕಳೆದ 3 ವರ್ಷಗಳಲ್ಲಿ ಆರ್ಥಿಕ ನಷ್ಟ ಅನುಭವಿಸಿರುತ್ತವೆ. |
| ಇ) | ಆರ್ಥಿಕವಾಗಿ ನಷ್ಟದಲ್ಲಿರುವ ನಿಗಮ ಮಂಡಳಿಗಳ ಪುನಶ್ಚೇತನಕ್ಕೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಕೊರೋನಾ-19 ಸಂಬಂಧ ಲಾಕ್‌ಡೌನ್ ಅವಧಿ ಮತ್ತು ಮುಂದುವರೆದ ಅವಧಿಯಲ್ಲಿ ಸಾರಿಗೆ ಸಂಚಾರವಿಲ್ಲದೆ ಸಂಸ್ಥೆಗಳು ಆರ್ಥಿಕ ಸಂಕಷ್ಟದಲ್ಲಿದ್ದ ಸಂದರ್ಭದಲ್ಲಿ, ಅಧಿಕಾರಿ/ ಸಿಬ್ಬಂದಿಗಳಿಗೆ ಏಪ್ರಿಲ್-2020ರಿಂದ ನವೆಂಬರ್-2020ರವರೆಗಿನ ವೇತನವನ್ನು ಪಾವತಿಸಲು, ಕ.ರಾ.ರ.ಸಾ.ನಿಗಮಕ್ಕೆ-ರೂ.563.55 ಕೋಟಿಗಳು, ವಾ.ಕ.ರ.ಸಾ.ಸಂಸ್ಥೆಗೆ-ರೂ.369.41 ಕೋಟಿಗಳು ಮತ್ತು ಈ.ಕ.ರ.ಸಾ.ಸಂಸ್ಥೆಗೆ-ರೂ.329.89 ಕೋಟಿಗಳು ಹಾಗೂ ಬೆಂ.ಮ.ಸಾ.ಸಂಸ್ಥೆಗೆ ಮೇಲಿನ ಅವಧಿಯೊಂದಿಗೆ ಡಿಸೆಂಬರ್-2020 ಮತ್ತು ಜನವರಿ-2021ರ ಮಾಹೆಯ ವೇತನವನ್ನೂ ಸಹ ಪಾವತಿಸಲು-ರೂ.606.55 ಕೋಟಿಗಳಂತೆ, ಸರ್ಕಾರವು ಒಟ್ಟಾರೆಯಾಗಿ ರೂ.1869.40 ಕೋಟಿಗಳ ವಿಶೇಷ ಅನುದಾನವನ್ನು ಬಿಡುಗಡೆಗೊಳಿಸಿರುತ್ತದೆ.<br>ಅಲ್ಲದೇ, ಆರ್ಥಿಕವಾಗಿ ನಷ್ಟದಲ್ಲಿರುವ ನಿಗಮ ಮಂಡಳಿಗಳ ಪುನಶ್ಚೇತನಕ್ಕೆ ತೆಗೆದುಕೊಂಡ ಕ್ರಮಗಳ ವಿವರವನ್ನು <u>ಅನುಬಂಧದಲ್ಲಿ</u> ನೀಡಲಾಗಿದೆ. |

ಸಂಖ್ಯೆ: ಟಿಡಿ 60 ಟಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಅನುಬಂಧ

## ಸಾರಿಗೆ ಸಂಸ್ಥೆಗಳ ಪುನಃಶ್ಚೇತನಕ್ಕಾಗಿ ಕೈಗೊಂಡಿರುವ ಕ್ರಮಗಳು

### ಕ.ರಾ.ರ.ಸಾ.ನಿಗಮ:

- ಕ.ರಾ.ರ.ಸಾ.ನಿಗಮದ ವತಿಯಿಂದ ಸಾಮಾನ್ಯ, ನಗರ ಮತ್ತು ವೇಗದೂತ ಸಾರಿಗೆಗಳಲ್ಲದೆ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ರಾಜಹಂಸ, ಐರಾವತ, ಎ.ಸಿ ಸ್ಲೀಪರ್, ನಾನ್ ಎಸಿ ಸ್ಲೀಪರ್, ಐರಾವತ ಕ್ಲಬ್‌ಕ್ಲಾಸ್, ಫ್ಲೈ-ಬಸ್, ಅಂಬಾರಿ ಡ್ರೀಮ್‌ಕ್ಲಾಸ್ ಮುಂತಾದ ಪ್ರತಿಷ್ಠಿತ ಸಾರಿಗೆಗಳನ್ನು ಕಾರ್ಯಾಚರಿಸಿ ರಾಜ್ಯದ ಹಾಗೂ ನೆರೆ ರಾಜ್ಯದ ಪ್ರಮುಖ ಸ್ಥಳಗಳಿಗೆ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.
- ಕರ್ನಾಟಕ ಮತ್ತು ನೆರೆ ರಾಜ್ಯಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ, ಗುಜರಾತ್, ತಮಿಳುನಾಡು ಮತ್ತು ಪುದುಚೆರಿ ರಾಜ್ಯಗಳ ಜೊತೆಗೆ ನೂತನ ಪೂರಕ ಅಂತರರಾಜ್ಯ ಸಾರಿಗೆ ಒಪ್ಪಂದಗಳನ್ನು ಮಾಡಿಕೊಳ್ಳುವ ಪ್ರಸ್ತಾವನೆ ಇದ್ದು ಒಪ್ಪಂದಗಳ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. ಈ ರಾಜ್ಯಗಳ ಜೊತೆಗೆ ಒಪ್ಪಂದವಾದ ನಂತರ ಕರ್ನಾಟಕದಿಂದ ಹೆಚ್ಚುವರಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡಲು ಹಾಗೂ ಹೆಚ್ಚು ಸಾರಿಗೆ ಆದಾಯ ಗಳಿಸಲು ಅವಕಾಶವಾಗುವುದು.
- ಕ.ರಾ.ರ.ಸಾ ನಿಗಮವು ಟಿಕೇಟ್ ವಿತರಣೆಯಲ್ಲಿ ಸರಳತೆ ಹಾಗೂ ಪಾರದರ್ಶಕತೆ ತರುವ ನಿಟ್ಟಿನಲ್ಲಿ ಇ.ಟಿ.ಎಂ (Electronic Ticketing Machine) ಜಾರಿಗೆ ತಂದಿರುತ್ತದೆ.
- ಸಾರ್ವಜನಿಕ ಪ್ರಯಾಣಿಕರಿಗೆ ಮುಂಗಡವಾಗಿ ಆಸನಗಳನ್ನು ಕಾಯ್ದಿರಿಸುವ ಅನುಕೂಲಕ್ಕಾಗಿ ನಿಗಮವು ಅವತಾರ್(ಯಾವುದೇ ಸ್ಥಳದಿಂದ ಯಾವುದೇ ಸಮಯದಲ್ಲಿ ಟಿಕೇಟು ಕಾಯ್ದಿರಿಸುವಿಕೆ) ಗಣಕೀಕೃತ ಮುಂಗಡ ಬುಕಿಂಗ್ ಯೋಜನೆ ಜಾರಿಗೊಳಿಸಿದ್ದು, ರಾಜ್ಯದ ಹಾಗೂ ಹೊರ ರಾಜ್ಯಗಳ ಪ್ರಮುಖ ಸ್ಥಳಗಳಲ್ಲಿ ನಿಗಮದ ಕೌಂಟರುಗಳು/ಖಾಸಗಿ ಬುಕಿಂಗ್ ಏಜೆಂಟರುಗಳ ಮೂಲಕ ಮುಂಗಡ ಟಿಕೇಟ್ ಬುಕಿಂಗ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.
- ಕರಾರಸಾ ನಿಗಮದ ಸಾರಿಗೆಗಳಲ್ಲಿ ಮುಂಗಡ ಆಸನಗಳನ್ನು ಕಾಯ್ದರಿಸಲು ಜಿ.ಪಿಆರ್‌ಎಸ್ ಸೌಲಭ್ಯವುಳ್ಳ ಮೊಬೈಲ್ ದೂರವಾಣಿ ಮೂಲಕ ಮುಂಗಡ ಟಿಕೇಟು ಕಾಯ್ದಿರಿಸುವ ಎಂ-ಬುಕಿಂಗ್ ಮತ್ತು ಇ-ಬುಕಿಂಗ್ ವ್ಯವಸ್ಥೆ ಜಾರಿಗೊಳಿಸಿದೆ.
- ಸಾರ್ವಜನಿಕ ಪ್ರಯಾಣಿಕರು ನಿಲ್ದಾಣವಾರು ವಾಹನಗಳ ನಿರ್ಗಮನಗಳ ಮಾಹಿತಿ ಪಡೆಯಲು ಮೈಸೂರು ನಗರದ ನಗರ ಸಾರಿಗೆ ವಾಹನಗಳಲ್ಲಿ **ಐ.ಟಿ.ಎಸ್**(ಇಂಟೆಲಿಜೆಂಟ್ ಟ್ರಾನ್ಸ್‌ಪೋರ್ಟ್ ಸಿಸ್ಟಮ್) ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಸದರಿ ವಾಹನಗಳಲ್ಲಿ ಸಾರ್ವಜನಿಕ ಪ್ರಯಾಣಿಕರಿಗೆ ನಿಲ್ದಾಣವಾರು ಘೋಷಣೆಯ ವ್ಯವಸ್ಥೆಯನ್ನು ಅಳವಡಿಸಲಾಗಿದೆ.(ಪ್ಯಾಸೆಂಜರ್ ಅನೌನ್ಸ್‌ಮೆಂಟ್ ಸಿಸ್ಟಮ್).
- ಚಾಲನಾ ಸಿಬ್ಬಂದಿಗಳ ಅನುಕೂಲಕ್ಕಾಗಿ ಎಲ್ಲಾ ಘಟಕಗಳಲ್ಲಿ ಗಣಕೀಕೃತ ಡ್ಯೂಟಿರೋಟಾ ಸಿಸ್ಟಮ್‌ನ್ನು ಅಳವಡಿಸಿ ಮಾರ್ಗ ನಿಯೋಜನೆಯಲ್ಲಿ ಪಾರದರ್ಶಕ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ.
- ನಿಗಮದ ಘಟಕಗಳಲ್ಲಿನ ಚಾಲನಾ/ತಾಂತ್ರಿಕ ಸಿಬ್ಬಂದಿಯ ರಜೆ ಮಂಜೂರಾತಿಯಲ್ಲಿ ಪಾರದರ್ಶಕತೆ ತರಲು ರಜೆ ಪಡೆಯುವ ಸಿಬ್ಬಂದಿಗಳು ಮೊಬೈಲ್/ಗಣಕ ಯಂತ್ರಗಳ ಮೂಲಕ ರಜೆ ಪಡೆಯುವ ಗಣಕೀಕೃತ ರಜೆ ವ್ಯವಸ್ಥೆನ್ನು (Online Leave Management System) ಅಳವಡಿಸಲಾಗಿದೆ.
- ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ನಿಗಮದ ಪ್ರಮುಖ 107 ಬಸ್ ನಿಲ್ದಾಣಗಳಲ್ಲಿ ವಾಹನಗಳ ಸಂಖ್ಯೆ, ನಿರ್ಗಮನದ ವೇಳೆ, ತಲುಪುವ ಸ್ಥಳ, ಮಾರ್ಗದ ಮಾಹಿತಿಯನ್ನು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆಯ ಮುಖಾಂತರ ತಿಳಿಸಲಾಗುತ್ತಿದೆ.
- ಕ.ರಾ.ರ.ಸಾ.ನಿಗಮದ ವತಿಯಿಂದ ಬೆಂಗಳೂರಿನಿಂದ ತಿರುಪತಿ-ತಿರುಮಲಕ್ಕೆ ಪ್ಯಾಕೇಜ್ ಟೂರ್‌ಗಳ ಆಚರಣೆ ಮಾಡಲಾಗುತ್ತಿದೆ.

### ಬೆಂ.ಮ.ಸಾ.ಸಂಸ್ಥೆ

- ಸಾರ್ವಜನಿಕರನ್ನು ಸಮೂಹ ಸಾರಿಗೆಯತ್ತ ಸೆಳೆಯುವ ದೃಷ್ಟಿಯಿಂದ ಸಂಸ್ಥೆಯು ವಿವಿಧ ರೀತಿಯ ರಿಯಾಯಿತಿ ಪಾಸುಗಳನ್ನು ವಿತರಣೆ ಮಾಡುತ್ತಿದೆ.
- ಸಂಸ್ಥೆಯು ಕಾರ್ಮಿಕ ಇಲಾಖೆಯ ಸಹಯೋಗದೊಂದಿಗೆ ಬೆಂಗಳೂರು ನಗರದ ಕಟ್ಟಡ ಮತ್ತು ನಿರ್ಮಾಣ ಕಾರ್ಮಿಕರಿಗೆ 'ಸಹಾಯ ಹಸ್ತ' ಪಾಸನ್ನು ವಿತರಣೆ ಮಾಡುತ್ತಿದೆ.
- ಸರ್ಕಾರ, ಬಿಬಿಎಂಪಿ, ಬಿಟಿಪಿ, ನಗರ ಭೂ ಸಾರಿಗೆ ನಿರ್ದೇಶನಾಲಯ ರವರುಗಳ ಸಹಯೋಗದೊಂದಿಗೆ ಸೆಂಟ್ರಲ್ ಸಿಲ್ಕ್ ಬೋರ್ಡ್‌ನಿಂದ ಟಿನ್ ಫ್ಯಾಕ್ಟರಿಯವರೆಗೆ 'ಬಸ್ ಆದ್ಯತಾ ಪಥವನ್ನು' ಯಶಸ್ವಿಯಾಗಿ ಅನುಷ್ಠಾನಗೊಳಿಸಲಾಗಿದೆ. ಇದರಿಂದ ನಗರದ ಸಂಚಾರ ದಟ್ಟಣೆಯು ಕಡಿಮೆಯಾಗಿ, ಸಾರ್ವಜನಿಕರನ್ನು ಸಮೂಹ ಸಾರಿಗೆಯನ್ನು ಬಳಸಲು ಉತ್ತೇಜಿಸಲಾಗುತ್ತಿದೆ.

...2

- ಮುಂದುವರೆದು, ನಗರದ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸುವ ಹಿನ್ನಲೆಯಲ್ಲಿ ಹೆಚ್ಚಿನ ಸಂಚಾರ ದಟ್ಟಣೆಯ ಕಾರಿಡಾರ್‌ಗಳಲ್ಲಿ ಬಸ್ ಆದ್ಯತಾ ಪಥವನ್ನು 2ನೇ ಹಂತದಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ.
- ಸಂಸ್ಥೆಯು ಸಾಂದರ್ಭಿಕ ಒಪ್ಪಂದ, ಖಾಯಂ ಗುತ್ತಿಗೆ ಹಾಗೂ ಡೆಡಿಕೇಟೆಡ್ ಸೇವೆಗಳನ್ನು ಒದಗಿಸುತ್ತಿದೆ.
- ಮೆಟ್ರೋ ಪ್ರಯಾಣಿಕರಿಗೆ First & Last mile ಸಂಪರ್ಕವನ್ನು ಒದಗಿಸಲು ಎಲ್ಲಾ ಮೆಟ್ರೋ ನಿಲ್ದಾಣಗಳಿಂದ ವಿವಿಧ ಬಡಾವಣೆಗಳಿಗೆ/ಸ್ಥಳಗಳಿಗೆ ಮೆಟ್ರೋ ಫೀಡರ್ ಸೇವೆಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ.
- ಸಂಸ್ಥೆಯು ಬೆಂಗಳೂರು ನಗರಕ್ಕೆ ಸಾರಿಗೆ ಸೌಲಭ್ಯ ಒದಗಿಸಲು ಏಕಸ್ವಾಮ್ಯತೆಯನ್ನು ಹೊಂದಿದ್ದು, ನಗರದ ಸಾರ್ವಜನಿಕರಿಗೆ ಸೇವಾಧಾರಿತವಾಗಿ ಸಾರಿಗೆ ಸೌಲಭ್ಯವನ್ನು ಒದಗಿಸಲಾಗುತ್ತಿದೆ. ನಗರದ ಸಂಚಾರ ದಟ್ಟಣೆಯಿಂದಾಗಿ ಭೌತಿಕ ಅಂಶಗಳ ಗುರಿಯನ್ನು ಸಾಧಿಸಲು ಸಾಧ್ಯವಾಗದೇ, ಸಂಸ್ಥೆಯು ಸತತವಾಗಿ ಸಂಚಿತ ನಷ್ಟವನ್ನು ಅನುಭವಿಸುತ್ತಿದೆ. ಸದರಿ ನಷ್ಟವನ್ನು ಭರಿಸುವ ಸಂಬಂಧ 'Viability Gap Funding'ಗಾಗಿ 2020-21ನೇ ಸಾಲಿನಲ್ಲಿ ರೂ.158.00 ಕೋಟಿಗಳ ಅನುದಾನ ಬಿಡುಗಡೆಗೊಳಿಸಿದೆ.
- ಸಮೂಹ ಸಾರಿಗೆಯನ್ನು ಬಳಸಲು ಸಾರ್ವಜನಿಕರನ್ನು ಉತ್ತೇಜಿಸಲು ಭಾರತ ಸರ್ಕಾರದ ಫೇಮ್-2 ಅಡಿಯಲ್ಲಿ 300 ಹವಾನಿಯಂತ್ರಿತ ಬಸ್ಸುಗಳು, ರಾಜ್ಯ ಸರ್ಕಾರದ ಯೋಜನೆಯಡಿಯಲ್ಲಿ ಹಾಗೂ ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ 90 ಮೆಟ್ರೋ ಫೀಡರ್ ಬಸ್ಸುಗಳು ಹಾಗೂ 643 ಬಸ್ಸುಗಳನ್ನು ಸಂಸ್ಥೆಯ ವಾಹನ ಬಲಕ್ಕೆ ಸೇರ್ಪಡೆಗೊಳಿಸಲು ಯೋಜಿಸಲಾಗಿದೆ.
- ನಗರದಲ್ಲಿ ಉತ್ತಮ ಸಾರಿಗೆ ಸೌಲಭ್ಯವನ್ನು ಒದಗಿಸಲು ನಿರ್ಭಯ ಯೋಜನೆಯಡಿ Vehicle Tracking System, Passenger Information System, Mobile app ಗಳನ್ನು ಅನುಷ್ಠಾನಗೊಳಿಸಲು ಯೋಜಿಸಿದೆ.

<u>ವಾ.ಕ.ರ.ಸಾ.ಸಂಸ್ಥೆ</u>

- ವಿಭಾಗದ ಪ್ರತಿಷ್ಠಿತ ಸಾರಿಗೆಗಳಿಗೆ ಪ್ರೋತ್ಸಾಹಕ ಪ್ರಯಾಣ ದರಗಳನ್ನು ಅಳವಡಿಸಲಾಗಿದೆ.
- ಸಂಸ್ಥೆಯ ವಾಹನಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೆ ಆಯ್ದ ಮಾರ್ಗಗಳಲ್ಲಿ ರಿಯಾಯಿತಿ ದರದಲ್ಲಿ ದೈನಂದಿನ ಪಾಸುಗಳನ್ನು ವಿತರಿಸಲಾಗುತ್ತಿದೆ.
- ನಗರ/ ಉಪನಗರ ಸಾರಿಗೆಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೂ ಕೂಡ ದೈನಂದಿನ ಪಾಸ್ ಸೌಲಭ್ಯ ಒದಗಿಸಲಾಗಿದೆ.
- ಮಾಸಿಕ ಬಸ್ ಪಾಸ್ ವ್ಯವಸ್ಥೆಯನ್ನೂ ಕೂಡ ಅಳವಡಿಸಲಾಗಿದೆ.
- ಅವಶ್ಯಕ ಸರತಿಗಳನ್ನು ಹೊರತುಪಡಿಸಿ ಪ್ರಯಾಣಿಕರ ದಟ್ಟಣೆ ತೀರಾ ಕಡಿಮೆ ಇರುವ ಮಾರ್ಗಗಳಲ್ಲಿ ಹಾಗೂ ಮುಂಗಡ ಬುಕ್ಕಿಂಗ್ ಆಗದೇ ಇರುವ ಪ್ರತಿಷ್ಟಿತ ಸಾರಿಗೆಗಳನ್ನು ರದ್ದುಪಡಿಸಲಾಗುತ್ತಿದೆ.

<u>ಈ.ಕ.ರ.ಸಾ.ಸಂಸ್ಥೆ</u>

- ನೂತನ ಪಾರ್ಸಲ್ ಕೋರಿಯರ್ ವ್ಯವಸ್ಥೆಯನ್ನು ಪ್ರಾರಂಭಿಸಲಾಗಿದೆ.
- ಶಾಲಾ-ಕಾಲೇಜು ಮತ್ತು ಕಾರ್ಖಾನೆಗಳ ಮುಖ್ಯಸ್ಥರಿಗೆ ಪತ್ರ ಬರೆದು ಚಾರ್ಟರ್ಡ ಸರ್ವಿಸ್ ಪಡೆದುಕೊಳ್ಳಲು ಕ್ರಮ ಜರುಗಿಸಲಾಗಿರುತ್ತದೆ.
- ಖಾಲಿ ಇರುವ ಮಳಿಗೆಗಳಿಗೆ ಟೆಂಡರ್ ಪ್ರಕ್ರೀಯೆ ಸರಳೀಕರಣಗೊಳಿಸಿ ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಜಾಹೀರಾತು ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಅನುಸೂಚಿಗಳ ಪರಿಷ್ಕರಣೆ ಮಾಡಿ ಜನದಟ್ಟಣೆಯಿರುವ ಮಾರ್ಗಗಳಲ್ಲಿ ಸರತಿಗಳನ್ನು ಹೆಚ್ಚಿಸಿ ಸಾರಿಗೆ ಆದಾಯ ಹೆಚ್ಚಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.
- ಉತ್ತಮ ಆದಾಯ ಬರುವ ಮಾರ್ಗಗಳಲ್ಲಿ ಹೆಚ್ಚುವರಿ ಅನುಸೂಚಿಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ.
- ಕಡಿಮೆ ಆದಾಯ ಬರುವ ಅನುಸೂಚಿಗಳನ್ನು ಪರಿಷ್ಕರಣೆ ಮಾಡಲಾಗುತ್ತಿದೆ.
- ಮಾರ್ಗ ತನಿಖಾ ಕಾರ್ಯವನ್ನು ಸಮರ್ಪಕವಾಗಿ ಕೈಗೊಂಡು ಆದಾಯ ಸೋರಿಕೆಯಾಗದಂತೆ ಕ್ರಮವಹಿಸಲಾಗುತ್ತಿದೆ.
- ಸಂಸ್ಥೆಯ ವಾಹನಗಳ ಇಂಧನ ಕಾರ್ಯಕ್ಷಮತೆ (ಕೆ.ಎಂ.ಪಿ.ಎಲ್)ಯನ್ನು ಹೆಚ್ಚಿಸಿ, ಇಂದನ ಬಳಕೆಯನ್ನು ಕಡಿಮೆಗೊಳಿಸಿ ಇಂಧನ ಮೇಲಿನ ಖರ್ಚನ್ನು ಕಡಿಮೆಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ವ್ಯವಸ್ಥಿತವಾದ ವಾಹನ ನಿರ್ವಹಣೆ ಮಾಡುವ ಮೂಲಕ ಇಂಧನ ಸೋರಿಕೆ ಮುಂತಾದವುಗಳನ್ನು ತಡೆಗಟ್ಟಿ ಲುಬ್ರಿಕೆಂಟ್ಸ್ ಮತ್ತು ಬಿಡಿಭಾಗಗಳ ಮೇಲಿನ ಖರ್ಚನ್ನು ಕಡಿಮೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಹೊಸ ಟೈರ್‌ಗಳ ಮತ್ತು ಸಂಸ್ಕರಿಸಿದ ಟೈರ್‌ಗಳ ಜೀವಮಾನವನ್ನು ಹೆಚ್ಚಿಸಿ, ಟೈರುಗಳ ಮೇಲಿನ ಖರ್ಚನ್ನು ಕಡಿಮೆಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

*****